ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಆರ್. ಪ್ರಸನ್ನಕುಮಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 2013
ಉತ್ತರ ದಿನಾಂಕ : 27.03.2020

| ಕ್ರ. ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ. | ಶಿವಮೊಗ್ಗ ಜಿಲ್ಲೆಯಲ್ಲಿ ಎಷ್ಟು ಬಹುಗ್ರಾಮ ಕುಡಿಯುವ ನೀರು ಯೋಜನೆಗೆ ಆದೇಶ ನೀಡಿ ಮಂಜೂರಾತಿ ನೀಡಲಾಗಿದೆ. | ಶಿವಮೊಗ್ಗ ಜಿಲ್ಲೆಯಲ್ಲಿ ಒಟ್ಟಾರೆಯಾಗಿ 12 ಬಹುಗ್ರಾಮ ಕುಡಿಯುವ ನೀರಿನ ಯೋಜನೆಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿರುತ್ತದೆ. |
| ಆ. | ಮಂಜೂರಾತಿ ಆಗದೆ ಬಾಕಿ ಉಳಿದಿರುವ ಯೋಜನೆಗಳೆಷ್ಟು? | ಶಿವಮೊಗ್ಗ ಜಿಲ್ಲೆಗೆ ಸಂಬಂಧಿಸಿದಂತೆ 19 ಬಹುಗ್ರಾಮ ಕುಡಿಯುವ ನೀರಿನ ಯೋಜನೆ ಪ್ರಸ್ತಾವನೆಗಳಿಗೆ ಮಂಜೂರಾತಿಯಾಗಿರುವುದಿಲ್ಲ. |
| ಇ. | ಮಂಜೂರಾತಿಯಾಗಿರುವ ಯೋಜನೆಗಳು ಪೂರ್ಣಗೊಂಡಿವೆಯೇ; ಪೂರ್ಣಗೊಳ್ಳದೇ ಇರುವ ಯೋಜನೆಗಳು ಪ್ರಸ್ತುತ ಯಾವ ಸ್ಥಿತಿಯಲ್ಲಿವೆ; | ಶಿವಮೊಗ್ಗ ಜಿಲ್ಲೆಯಲ್ಲಿ ಮಂಜೂರಾದ 12 ಬಹುಗ್ರಾಮ ಕುಡಿಯುವ ನೀರಿನ ಯೋಜನೆಗಳ ಪೈಕಿ 8 ಬಹುಗ್ರಾಮ ಕುಡಿಯುವ ನೀರಿನ ಯೋಜನೆಗಳು ಪೂರ್ಣಗೊಂಡಿರುತ್ತದೆ. ಇದರಲ್ಲಿ 5 ಯೋಜನೆಗಳು ಕಾರ್ಯಾಚರಣೆ ಮತ್ತು ನಿರ್ವಹಣೆ ಹಂತದಲ್ಲಿವೆ. ಉಳಿದ 3 ಯೋಜನೆಗಳು ಸಿವಿಲ್ ಕಾಮಗಾರಿ ಮುಕ್ತಾಯಗೊಂಡು ಸದರಿ ಗುತ್ತಿಗೆದಾರರಿಂದಲೇ ಕಾರ್ಯಾಚರಣೆ ಮತ್ತು ನಿರ್ವಹಣೆ ಮಾಡಲಾಗುತ್ತಿರುತ್ತದೆ.<br><br>ಪ್ರಗತಿಯಲ್ಲಿರುವ 2 ಕಾಮಗಾರಿಗಳಲ್ಲಿ 1 ಕಾಮಗಾರಿ ಮುಕ್ತಾಯಗೊಳ್ಳುವ ಹಂತದಲ್ಲಿದ್ದು, ಇನ್ನೊಂದು ಕಾಮಗಾರಿ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದಿಂದ ಹಾಗೂ ರೈಲ್ವೆ ಇಲಾಖೆಯಿಂದ ರೈಲ್ವೆ ಕ್ರಾಸಿಂಗ್ ಮಾಡಲು ಅನುಮತಿ ದೊರೆತ ನಂತರ ಕಾಮಗಾರಿಯನ್ನು ಪೂರ್ಣಗೊಳಿಸಲಾಗುವುದು.<br><br>ಇನ್ನುಳಿದ 2 ಕಾಮಗಾರಿಗಳು ಈಗ ಮಂಜೂರಾತಿಯಾಗಿದ್ದು, ಟೆಂಡರ್ ಪ್ರಕ್ರಿಯೆಯಲ್ಲಿರುತ್ತವೆ. |
| ಈ. | ಈ ಯೋಜನೆಗಳಿಗೆ ಮಂಜೂರಾದ ಹಣವೆಷ್ಟು; ಬಿಡುಗಡೆಯಾಗಿರುವ ಹಣವೆಷ್ಟು; ಇನ್ನು ಬಿಡುಗಡೆಯಾಗ ಬೇಕಾಗಿರುವ ಹಣವನ್ನು ಯಾವಾಗ ಬಿಡುಗಡೆ ಮಾಡಲಾಗುವುದು. | (ರೂ.ಲಕ್ಷಗಳಲ್ಲಿ)<br>ಮಂಜೂರಾದ ಅಂದಾಜು ಮೊತ್ತ: 6355.61<br>ಬಿಡುಗಡೆಯಾದ ಮೊತ್ತ: 4763.74<br>ಬಾಕಿ ಬಿಡುಗಡೆಯಾಗಬೇಕಾದ ಮೊತ್ತ: 1591.87<br><br>ಇನ್ನು ಬಿಡುಗಡೆಯಾಗಬೇಕಾದ ಅನುದಾನವನ್ನು ಕಾಮಗಾರಿಯ ಪ್ರಗತಿಯನುಸಾರ ಬಿಡುಗಡೆ ಮಾಡಲಾಗುವುದು. |

ಸಂ.ಗ್ರಾಕುನೀ&ನೈಇ/131/ಗ್ರಾನೀಸ(5)/2020

(ಕೆ. ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು